# ಕರ್ನಾಟಕ ವಿಧಾನ ಪರಿಷತ್ತು

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 1365 |
| ಮಾನ್ಯ ಸದಸ್ಯರ ಹೆಸರು | ಶ್ರೀ ಕೆ.ಟಿ.ಶ್ರೀಕಂಠೇಗೌಡ (ಪದವೀಧರರ ಕ್ಷೇತ್ರದಿಂದ ಚುನಾಯಿತರಾದವರು) |
| ಉತ್ತರಿಸಬೇಕಾದ ದಿನಾಂಕ | 24.12.2021 |
| ಉತ್ತರಿಸುವ ಸಚಿವರು | ಮಾನ್ಯ ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು. |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ | ರಾಜ್ಯದಲ್ಲಿ ಇರುವ ಹಿಂದುಳಿದ ವರ್ಗಗಳಾವುವು; ಇವುಗಳಡಿ ಬರುವ ಜಾತಿಗಳು ಯಾವುವು; ಇವುಗಳನ್ನು ಯಾವ ರೀತಿ ವರ್ಗೀಕರಿಸಲಾಗಿದೆ; (ವಿವರವಾದ ಮಾಹಿತಿ ನೀಡುವುದು) | ಸರ್ಕಾರದ ಆದೇಶ ಸಂಖ್ಯೆ: ಸಕಇ 225 ಬಿಸಿಎ 2000 ದಿನಾಂಕ: 30.03.2002 ರಲ್ಲಿ ಹಿಂದುಳಿದ ವರ್ಗಗಳನ್ನು ಪ್ರವರ್ಗ-I, ಪ್ರವರ್ಗ- II(ಎ), ಪ್ರವರ್ಗ- II(ಬಿ), ಪ್ರವರ್ಗ- III(ಎ) ಮತ್ತು ಪ್ರವರ್ಗ-III(ಬಿ) ಎಂದು ವರ್ಗೀಕರಿಸಲಾಗಿದೆ.<br><br>(ಆದೇಶದ ಪ್ರತಿಯನ್ನು ಅನುಬಂಧದಲ್ಲಿ ನೀಡಲಾಗಿದೆ) |
| ಆ | ಚಿನ್ನಪ್ಪರೆಡ್ಡಿ ಆಯೋಗವನ್ನು ಯಾವಾಗ ನೇಮಿಸಲಾಯಿತು; ಈ ಆಯೋಗದ ಮುಖ್ಯಾಂಶಗಳೇನು; | ನ್ಯಾಯಮೂರ್ತಿ ಓ ಚಿನ್ನಪ್ಪರೆಡ್ಡಿ ಆಯೋಗವು ದಿನಾಂಕ: 09.05.1988 ರಿಂದ ದಿನಾಂಕ:07.04.1990ರ ಅವಧಿಯವರೆಗೆ ಕಾರ್ಯನಿರ್ವಹಿಸಿರುತ್ತದೆ.<br><br>ನ್ಯಾಯಮೂರ್ತಿ ಓ. ಚಿನ್ನಪ್ಪರೆಡ್ಡಿ ಆಯೋಗವು ಸರ್ಕಾರಕ್ಕೆ ಸಲ್ಲಿಸಿದ ವರದಿಯು ಪ್ರಮುಖವಾಗಿ ಈ ಕೆಳಕಂಡ ಅಂಶಗಳನ್ನು ಒಳಗೊಂಡಿರುತ್ತದೆ.<br><br>ಜನಸಂಖ್ಯೆಯಲ್ಲಿ ವಿವಿಧ ಜಾತಿಗಳ ಸಂಖ್ಯೆ, ರಾಜಕೀಯ ಪ್ರಾತಿನಿಧ್ಯ, ಜಾತಿ ಮತ್ತು ಧರ್ಮವಾರು ಅವಿದ್ಯಾವಂತರ ಸಂಖ್ಯೆ, ಜಾತಿವಾರು ಭೂ ಒಡೆತನ, ಎಸ್.ಎಸ್.ಎಲ್.ಸಿ ಯಲ್ಲಿ ಉತ್ತೀರ್ಣರಾದವರ ಸಂಖ್ಯೆ, ವಾರ್ಷಿಕ ವರಮಾನ, ವೈದ್ಯಕೀಯ, ಇಂಜಿನಿಯರ್, ಸ್ನಾತಕೋತ್ತರ ಹಾಗೂ ಕೃಷಿ ವಿಶ್ವವಿದ್ಯಾಲಯಗಳಲ್ಲಿನ ಪ್ರವೇಶ, ಮಹಿಳಾ ಉದ್ಯೋಗಿಗಳ ವಿವರ ಮತ್ತು ಸಮಾಜದಲ್ಲಿನ ಜಾತಿ ಶ್ರೇಣಿ ಇವುಗಳನ್ನು ಹಿಂದುಳಿದಿರುವಿಕೆಯನ್ನು ನಿರ್ಧರಿಸುವ ಅಂಶಗಳೆಂದು ಪರಿಗಣಿಸಲಾಗಿದೆ. |
| ಇ | OBC Certificate ಅಂದರೇನು; ಈ ಪ್ರಮಾಣ ಪತ್ರವನ್ನು ಪಡೆಯಲು ಇರುವ ಮಾನದಂಡಗಳೇನು; | ಕೇಂದ್ರ ಸರ್ಕಾರದ ವತಿಯಿಂದ ನಡೆಸಲ್ಪಡುವ ಶಿಕ್ಷಣ ಸಂಸ್ಥೆಗಳಲ್ಲಿ ಪ್ರವೇಶಾವಕಾಶ ಮತ್ತು ಉದ್ಯೋಗಾವಕಾಶಕ್ಕೆ ಸಂಬಂಧಿಸಿದಂತೆ, ಇತರೆ ಹಿಂದುಳಿದ ವರ್ಗಗಳಿಗೆ ಶೇಕಡ 27 ರಷ್ಟು ಮೀಸಲಾತಿಯನ್ನು ನಿಗದಿಪಡಿಸಲಾಗಿದೆ.<br><br>ಇತರೆ ಹಿಂದುಳಿದ ವರ್ಗಗಳ ಪ್ರಮಾಣ ಪತ್ರವನ್ನು (OBC Certificate) ಪಡೆಯಲು ಇರುವ ಮಾನದಂಡಗಳ ಕುರಿತ ಮಾಹಿತಿಯು Ministry of Social Justice and Empowerment, Govt. Of India, New Delhi ಇವರ ಕಾರ್ಯವ್ಯಾಪ್ತಿಗೆ ಬರುತ್ತದೆ. |